# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 212 |
| ಸದಸ್ಯರ ಹೆಸರು | ಶ್ರೀ ಆರ್.ಪ್ರಸನ್ನಕುಮಾರ್ |
| ಉತ್ತರಿಸುವ ದಿನಾಂಕ: | 04.03.2020 |
| ಉತ್ತರಿಸುವವರು | ಮುಜರಾಯಿ ಹಾಗೂ ಮೀನುಗಾರಿಕೆ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು |

| | ಪ್ರಶ್ನೆ | ಉತ್ತರ |
|---|---|---|
| ಅ | ಶಿವಮೊಗ್ಗ ಜಿಲ್ಲೆಯಲ್ಲಿ ಎಷ್ಟು ದೇವಸ್ಥಾನಗಳ ಜೀರ್ಣೋದ್ಧಾರಕ್ಕಾಗಿ ಸರ್ಕಾರದಿಂದ ಅನುದಾನ ನೀಡಲಾಗಿದೆ; (ಕಳೆದ ಎರಡು ವರ್ಷಗಳ ತಾಲ್ಲೂಕುವಾರು ಮಾಹಿತಿ ನೀಡುವುದು) | ಮುಜರಾಯಿ ಇಲಾಖೆಯ ದುರಸ್ತಿ/ ಜೀರ್ಣೋದ್ಧಾರ/ ಅಭಿವೃದ್ಧಿ ಯೋಜನೆ ಯಡಿಯಲ್ಲಿ ಕಳೆದ ಎರಡು ವರ್ಷಗಳಲ್ಲಿ ಶಿವಮೊಗ್ಗ ಜಿಲ್ಲೆಯ 134 ದೇವಸ್ಥಾನಗಳ ಜೀರ್ಣೋದ್ಧಾರಕ್ಕಾಗಿ ಸರ್ಕಾರದಿಂದ ಒಟ್ಟು **ರೂ.535.00** ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡಲಾಗಿದೆ. ತಾಲ್ಲೂಕುವಾರು ಮಾಹಿತಿ ಕೆಳಗಿನಂತಿದೆ. |

| ತಾಲ್ಲೂಕು | 2017-18 | | 2018-19 | |
|---|---|---|---|---|
| | ಸಂಸ್ಥೆಗಳ ಸಂಖ್ಯೆ | ಮೊತ್ತ ರೂ.ಲಕ್ಷಗಳಲ್ಲಿ | ಸಂಸ್ಥೆಗಳ ಸಂಖ್ಯೆ | ಮೊತ್ತ ರೂ.ಲಕ್ಷಗಳಲ್ಲಿ |
| ಶಿವಮೊಗ್ಗ | 22 | 113.00 | 09 | 33.00 |
| ಭದ್ರಾವತಿ | 47 | 126.00 | 16 | 33.00 |
| ತೀರ್ಥಹಳ್ಳಿ | 9 | 59.00 | - | - |
| ಶಿಕಾರಿಪುರ | 3 | 15.00 | 11 | 55.00 |
| ಸಾಗರ | 8 | 59.00 | - | - |
| ಸೊರಬ | 3 | 10.00 | 02 | 10.00 |
| ಹೊಸನಗರ | 4 | 22.00 | - | - |
| **ಒಟ್ಟು ಮೊತ್ತ** | **96** | **404.00** | **38** | **131.00** |

| | ಪ್ರಶ್ನೆ | ಉತ್ತರ |
|---|---|---|
| ಆ | ಜನ ಪ್ರತಿನಿಧಿಗಳಿಂದ ಹಾಗೂ ಸಾರ್ವಜನಿಕರಿಂದ ಅನುದಾನಕ್ಕಾಗಿ ಬೇಡಿಕೆಯನ್ನು ಸಲ್ಲಿಸುತ್ತಿದ್ದರೂ, ಅನುದಾನ ನೀಡದಿರುವುದರಿಂದ ಹೆಚ್ಚು ಹಣವನ್ನು ಆಯವ್ಯಯದಲ್ಲಿ ಪಡೆಯಲು ಅಗತ್ಯ ಕ್ರಮ ಕೈಗೊಳ್ಳಲಾಗುವುದೇ; | ರಾಜ್ಯದಲ್ಲಿರುವ ದೇವಸ್ಥಾನ/ಧಾರ್ಮಿಕ ಸಂಸ್ಥೆಗಳ ಜೀರ್ಣೋದ್ಧಾರಕ್ಕಾಗಿ ಅನುದಾನ ಮಂಜೂರು ಮಾಡುವಂತೆ ಜನ ಪ್ರತಿನಿಧಿಗಳಿಂದ ಹಾಗೂ ಸಾರ್ವಜನಿಕರಿಂದ ಸ್ವೀಕೃತವಾಗುವ ಬೇಡಿಕೆಗೆ ಅನುಸಾರವಾಗಿ 2020-21ನೇ ಸಾಲಿನ ಆಯವ್ಯಯದಲ್ಲಿ ಹೆಚ್ಚಿನ ಅನುದಾನ ಒದಗಿಸುವಂತೆ ಆರ್ಥಿಕ ಇಲಾಖೆಯನ್ನು ಕೋರಲಾಗಿದೆ. |
| ಇ | ಈ ನಿಟ್ಟಿನಲ್ಲಿ ಸರ್ಕಾರ ಯಾವ ಕ್ರಮಗಳನ್ನು ಕೈಗೊಳ್ಳಲಿದೆ? | |

(ಸಂಖ್ಯೆ:ಕಂಇ 09 ಮುಸಪ್ರ 2020)

**(ಕೋಟಾ ಶ್ರೀನಿವಾಸ ಪೂಜಾರಿ)**
ಮುಜರಾಯಿ ಹಾಗೂ ಮೀನುಗಾರಿಕೆ, ಬಂದರು
ಮತ್ತು ಒಳನಾಡು ಜಲಸಾರಿಗೆ ಸಚಿವರು